## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | 806 |
| 2 | ಸದಸ್ಯರ ಹೆಸರು | : | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ |
| 3 | ಉತ್ತರಿಸುವ ಸಚಿವರು | : | ತೋಟಗಾರಿಕೆ ಸಚಿವರು |
| 4 | ಉತ್ತರಿಸಬೇಕಾದ ದಿನಾಂಕ | : | 17.12.2018 |

| ಪ್ರಶ್ನೆ | ಉತ್ತರ |
|---|---|
| ಅ) ಆಯವ್ಯಯ ಅಧಿವೇಶನದಲ್ಲಿ ಘೋಷಿಸಿದಂತೆ ಕೃಷಿ ಅಭಿವೃದ್ಧಿಗಾಗಿ ಇಸ್ರೇಲ್ ಮಾದರಿಯ ತಂತ್ರಜ್ಞಾನ ಬಳಸಿ, ನೀರಾವರಿ ವ್ಯವಸ್ಥೆ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಆಯವ್ಯಯ ಅಧಿವೇಶನದಲ್ಲಿ ಘೋಷಿಸಿದಂತೆ ಕೃಷಿ ಅಭಿವೃದ್ಧಿಗಾಗಿ ಇಸ್ರೇಲ್ ಮಾದರಿಯ ತಂತ್ರಜ್ಞಾನ ಬಳಸಿ, ನೀರಾವರಿ ವ್ಯವಸ್ಥೆ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿರುತ್ತವೆ;<br>1. ಕರ್ನಾಟಕದಲ್ಲಿ ಇಸ್ರೇಲ್ ಮಾದರಿ ನೀರಾವರಿ ವ್ಯವಸ್ಥೆ ಕಲ್ಪಿಸಲು ಸರ್ಕಾರದ ಮಟ್ಟದಲ್ಲಿ ಅಪರ ಕಾರ್ಯದರ್ಶಿಗಳು, ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ.<br>2. ಸಮಿತಿಯು ಮಾನ್ಯ ತೋಟಗಾರಿಕೆ ಸಚಿವರು ಮತ್ತು ಕೃಷಿ ಸಚಿವರೊಂದಿಗೆ ಸೆಪ್ಟೆಂಬರ್ 2018ರ ಮಾಹೆಯಲ್ಲಿ ಇಸ್ರೇಲ್ ದೇಶಕ್ಕೆ ಭೇಟಿ ನೀಡಿ, ಇಸ್ರೇಲ್ ಮಾದರಿ ನೀರಾವರಿ ವ್ಯವಸ್ಥೆ ಅಧ್ಯಯನ ಕೈಗೊಂಡಿರುತ್ತದೆ ಹಾಗೂ ಇತರೆ ರಾಜ್ಯಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.<br>3. ಸಮಿತಿಯು ಕರ್ನಾಟಕದಲ್ಲಿ ಇಸ್ರೇಲ್ ಮಾದರಿ ತಂತ್ರಜ್ಞಾನ ಆಧಾರಿತ ಕೃಷಿ ಕುರಿತು ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ.<br>4. ಈ ವರದಿಯನ್ನು ಆಧರಿಸಿ ಸಿದ್ದಪಡಿಸಲಾದ ಪ್ರಸ್ತಾವನೆಗೆ ಸಚಿವ ಸಂಪುಟದ ಅನುಮೋದನೆ ಕೋರಿ ಸಲ್ಲಿಸಲಾಗಿದೆ. |
| ಆ) ಮೊದಲ ಹಂತದಲ್ಲಿ ಯಾವ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ ಹಾಗೂ ಆ ಜಿಲ್ಲೆಗಳಲ್ಲಿ ಸದರಿ ತಂತ್ರಜ್ಞಾನದೊಂದಿಗೆ ಕೃಷಿ ಚಟುವಟಿಕೆಗಳು ಪ್ರಾರಂಭವಾಗಿವೆಯೇ: | ಇಸ್ರೇಲ್ ಮಾದರಿ ಕೃಷಿ ಪದ್ಧತಿಯನ್ನು ತೋಟಗಾರಿಕೆ ವಲಯದಲ್ಲಿ ಅಳವಡಿಸಿಕೊಳ್ಳಲು 2018-19ರ ಆಯವ್ಯಯ ಘೋಷಣೆ ಅನ್ವಯ ಮೊದಲ ಹಂತದಲ್ಲಿ ಕೋಲಾರ, ಚಿತ್ರದುರ್ಗ, ಕೊಪ್ಪಳ, ಗದಗ, ಯಾದಗಿರಿ, ತುಮಕೂರು, ಉತ್ತರ ಕನ್ನಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಪ್ರಯೋಗಿಕವಾಗಿ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.<br>ಈ ಜಿಲ್ಲೆಗಳಲ್ಲಿ ಸದರಿ ತಂತ್ರಜ್ಞಾನದೊಂದಿಗೆ ಕೃಷಿ ಚಟುವಟಿಕೆಗಳನ್ನು ಪ್ರಾರಂಭಿಸಲು ಅನುಮೋದನೆ ಕೋರಿ ಪ್ರಸ್ತಾವನೆಯನ್ನು ಸಚಿವ ಸಂಪುಟಕ್ಕೆ ಸಲ್ಲಿಸಲಾಗಿದೆ. |
| ಇ) ಬಾಗಲಕೋಟೆ, ವಿಜಯಪುರ ಮತ್ತು ಬೆಳಗಾವಿ ಜಿಲ್ಲೆಗಳನ್ನೂ ಸಹ ಸದರಿ ಯೋಜನೆಯಲ್ಲಿ ಸೇರ್ಪಡೆ ಮಾಡಿಕೊಳ್ಳುವ ಪ್ರಸ್ತಾವನೆ ಸರ್ಕಾರದಲ್ಲಿದೆಯೇ; | ಬಾಗಲಕೋಟೆ, ಬೆಳಗಾವಿ ಮತ್ತು ವಿಜಯಪುರ ಜಿಲ್ಲೆಗಳನ್ನು ಸೇರ್ಪಡೆ ಮಾಡಿಕೊಳ್ಳಲು ಮನವಿಗಳು ಬಂದಿರುತ್ತವೆ. |
| ಈ) ಹಾಗಿದ್ದಲ್ಲಿ, ಸದರಿ ಜಿಲ್ಲೆಗಳನ್ನು ಯಾವ ಕಾಲಮಿತಿಯಲ್ಲಿ ಸೇರ್ಪಡೆ ಮಾಡಿಕೊಳ್ಳಲಾಗುವುದು? | ಸದರಿ ಜಿಲ್ಲೆಗಳನ್ನು ಸೇರ್ಪಡೆ ಮಾಡಿಕೊಳ್ಳಲು ಕಾಲಮಿತಿ ನಿಗದಿಪಡಿಸಿರುವುದಿಲ್ಲ. |

ಸಂಖ್ಯೆ: ತೋಇ 449 ತೋಣವಿ 2018

(ಎಂ.ಸಿ.ಮನಗೂಳಿ)
ತೋಟಗಾರಿಕೆ ಸಚಿವರು